# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 982 |
| ಸದಸ್ಯರ ಹೆಸರು | ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)<br>ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು |
| ಉತ್ತರಿಸಬೇಕಾದ ದಿನಾಂಕ | 13.03.2020 |
| ವಿಷಯ | ಗ್ರಾಮ ಪಂಚಾಯತಿಗಳಲ್ಲಿರುವ ಬಾಪೂಜಿ ಸೇವಾ ಕೇಂದ್ರಗಳ ಮೂಲ ಸೌಕರ್ಯಗಳ ಬಗ್ಗೆ. |
| ಉತ್ತರಿಸುವವರು | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮ ಪಂಚಾಯತಿಗಳು ಬಾಪೂಜಿ ಸೇವಾ ಕೇಂದ್ರದಿಂದ ಎಷ್ಟು ಸೇವೆಗಳನ್ನು ಒದಗಿಸುತ್ತಿವೆ; (ಕಳೆದ 03 ವರ್ಷಗಳ ಮಾಹಿತಿಯನ್ನು ನೀಡುವುದು) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ 24 ಸೇವೆಗಳು ಮತ್ತು ಕಂದಾಯ ಇಲಾಖೆಯ 40 ಸೇವೆಗಳನ್ನು ಬಾಪೂಜಿ ಸೇವಾ ಕೇಂದ್ರದ ಮೂಲಕ ಒದಗಿಸಲಾಗುತ್ತಿದೆ. ಸೇವೆಗಳ ವಿಲೇವಾರಿ ವಿವರ ಈ ಕೆಳಗಿನಂತಿದೆ. |

| | 2016-17 | 2017-18 | 2018-19 |
|---|---|---|---|
| RDPR Services | 13,64,542 | 17,89,432 | 18,39,565 |
| Nadakacheri Services | 1,86,953 | 5,07,372 | 2,16,940 |
| RTC | 13,64,920 | 21,53,534 | 15,212 |
| Nadakacheri OTC Services | - | - | 7,64,876 |
| IRTC | - | - | 1,12,389 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಬಾಪೂಜಿ ಸೇವಾ ಕೇಂದ್ರದ ವತಿಯಿಂದ ಸೇವೆಗಳನ್ನು ಗುರುತಿಸಿರುವ ಎಲ್ಲಾ ಸೇವೆಗಳನ್ನು ಒದಗಿಸಲು ಗ್ರಾಮ ಪಂಚಾಯತಿಗಳಲ್ಲಿ ಡಾಟಾಎಂಟ್ರಿ ಆಪರೇಟರ್‍ಗಳ ಹುದ್ದೆ ಲಭ್ಯವಿದೆಯೇ; ಇಲ್ಲದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? | ಗ್ರಾಮ ಪಂಚಾಯತಿಗಳಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಡಾಟಾ ಎಂಟ್ರಿ ಆಪರೇಟರ್ ಗಳೇ ಬಾಪೂಜಿ ಸೇವಾ ಕೇಂದ್ರಗಳನ್ನು ನಿರ್ವಹಿಸುತ್ತಿರುತ್ತಾರೆ. |

| | | |
|---|---|---|
| ಇ) | ಗ್ರಾಮ ಪಂಚಾಯತಿಗಳು ಸ್ಥಳೀಯ ಸ್ವಯಂ ಸರ್ಕಾರವಾಗಿ ಆಡಳಿತ ನೀಡಲು ಸಂವಿಧಾನ ಅವಕಾಶ ನೀಡಿದ್ದರೂ ಈ ಕೇಂದ್ರದಲ್ಲಿ ಎದುರಿಸುತ್ತಿರುವ ಮೂಲ ಸಮಸ್ಯೆಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗ್ರಾಮ ಪಂಚಾಯತಿಗಳಲ್ಲಿ ಲಭ್ಯವಿರುವ ಗಣಕಯಂತ್ರ, ಅಂತರ್ಜಾಲ ವ್ಯವಸ್ಥೆಯನ್ನೇ ಉಪಯೋಗಿಸಿಕೊಂಡು ಬಾಪೂಜಿ ಸೇವಾ ಕೇಂದ್ರದ ಮೂಲಕ ಸಕಾಲಕ್ಕೆ ಸಾರ್ವಜನಿಕರಿಗೆ ಸೇವೆಯನ್ನು ನೀಡಲಾಗುತ್ತಿದೆ. |
| ಈ) | ಗ್ರಾಮ ಪಂಚಾಯತಿಗೊಬ್ಬ ಡಾಟಾಎಂಟ್ರಿ ಆಪರೇಟರ್ ನೇಮಕಾತಿಗೆ ಸರ್ಕಾರ ಹೊರಡಿಸಿದ್ದ ಅಧಿಸೂಚನೆಯನ್ವಯ ನ್ಯಾಯಾಲಯದ ಹಾಲಿ ಪ್ರಕ್ರಿಯೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ವಿವರ ನೀಡುವುದು. | ಗ್ರಾಮ ಪಂಚಾಯತಿಗಳ ಡಾಟಾ ಎಂಟ್ರಿ ಆಪರೇಟರ್ ಹುದ್ದೆಗಳಿಗೆ ನೇಮಕಾತಿ ಪ್ರಕ್ರಿಯೆ ಪ್ರಾರಂಭಿಸಲಾಗಿದ್ದು, ಈ ನೇಮಕಾತಿಗೆ ಮೀಸಲಾತಿ ನೀಡುವ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸುತ್ತಿರುವುದರಿಂದ ಡಾಟಾ ಎಂಟ್ರಿ ಆಪರೇಟರ್ ಹುದ್ದೆಯ ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ.<br>ಪ್ರಸ್ತುತ ಗ್ರಾಮ ಪಂಚಾಯತಿ ನೌಕರರಿಗೆ ಸಂಬಂಧಿಸಿದಂತೆ, The Karnataka Gram Swaraj and Panchayat Raj (Staffing Pattern, Scales of Pay, Method of Recruitment and Conditions of Service of Employees of Gram Panchayat) Rules, 2020 ರ ಕರಡನ್ನು ಸಂಸದೀಯ ವ್ಯವಹಾರಗಳ ಇಲಾಖೆಯು ಪರಿಶೋಧನೆ ಮಾಡಿದ್ದು, ದಿನಾಂಕ:29.02.2020 ರಂದು ಪ್ರಕಟಿಸಲಾಗಿದ್ದು, ಅಂತಿಮವಾಗಿ ನಿಯಮಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ನಂತರ ಕ್ರಮವಹಿಸಲಾಗುವುದು. |

ಸಂಖ್ಯೆ: ಗ್ರಾಅಪ/01/ಗ.ಕೋಶ/2020, ದಿನಾಂಕ:09.03.2020

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.